# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ಹದಿನಾಲ್ಕನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಗುರುವಾರ, ದಿನಾಂಕ 08ನೇ ಜೂನ್, 2017
(ಸಮಯ: ಬೆಳಿಗ್ಗೆ 11.30 ಗಂಟೆಗೆ)

----

### 1. ಪ್ರಶ್ನೋತ್ತರ

ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ನಾಲ್ಕನೇ ಪಟ್ಟಿ

ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ನಾಲ್ಕನೇ ಪಟ್ಟಿ

### 2. ವರದಿಯನ್ನೊಪ್ಪಿಸುವುದು

**ಶ್ರೀ ಎನ್.ಹೆಚ್. ಶಿವಶಂಕರ ರೆಡ್ಡಿ** (ಉಪ ಸಭಾಧ್ಯಕ್ಷರು ಹಾಗೂ ಅಧ್ಯಕ್ಷರು, ಖಾಸಗಿ ಸದಸ್ಯರುಗಳ ವಿಧೇಯಕಗಳ ಮತ್ತು ನಿರ್ಣಯಗಳ ಸಮಿತಿ) ಅವರು 2016–17ನೇ ಸಾಲಿನ ಖಾಸಗಿ ಸದಸ್ಯರುಗಳ ವಿಧೇಯಕಗಳ ಮತ್ತು ನಿರ್ಣಯಗಳ ಸಮಿತಿಯ 14ನೇ ವರದಿಯನ್ನೊಪ್ಪಿಸುವುದು.

### 3. ವಿತ್ತೀಯ ಕಾರ್ಯಕಲಾಪಗಳು

2017–18ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಗಳ ಮೇಲೆ ಮುಂದುವರೆದ ಚರ್ಚೆ.

| **ಬೇಡಿಕೆ ಸಂಖ್ಯೆ** | **ಬೇಡಿಕೆಯ ಹೆಸರು** |
|---|---|
| 01 | ಕೃಷಿ ಮತ್ತು ತೋಟಗಾರಿಕೆ |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ |
| 03 | ಆರ್ಥಿಕ |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ |
| 05 | ಒಳಾಡಳಿತ ಮತ್ತು ಸಾರಿಗೆ |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ |

. . . 2

| | |
|---|---|
| 07 | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ |
| 08 | ಅರಣ್ಯ, ಜೀವಿ ಶಾಸ್ತ್ರ ಮತ್ತು ಪರಿಸರ |
| 09 | ಸಹಕಾರ |
| 10 | ಸಮಾಜ ಕಲ್ಯಾಣ |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು |
| 13 | ಆಹಾರ ಮತ್ತು ನಾಗರೀಕ ಸರಬರಾಜು |
| 14 | ಕಂದಾಯ |
| 15 | ಮಾಹಿತಿ ತಂತ್ರಜ್ಞಾನ |
| 16 | ವಸತಿ |
| 17 | ಶಿಕ್ಷಣ |
| 18 | ವಾಣಿಜ್ಯ ಮತ್ತು ಕೈಗಾರಿಕೆ |
| 19 | ನಗರಾಭಿವೃದ್ಧಿ |
| 20 | ಲೋಕೋಪಯೋಗಿ |
| 21 | ಜಲ ಸಂಪನ್ಮೂಲ |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ |
| 23 | ಕಾರ್ಮಿಕ ಮತ್ತು ಕೌಶಲ್ಯ ಅಭಿವೃದ್ಧಿ |
| 24 | ಇಂಧನ |
| 25 | ಕನ್ನಡ ಮತ್ತು ಸಂಸ್ಕೃತಿ |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ |
| 27 | ಕಾನೂನು |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ |

## 4. ಗಮನ ಸೆಳೆಯುವ ಸೂಚನೆಗಳು

1. **ಶ್ರೀ ಎನ್.ಹೆಚ್. ಕೋನರಡ್ಡಿ** ಇವರು – ಮುಂಗಾರು ಮಳೆಯಾಗದೆ ಉತ್ತರ ಕರ್ನಾಟಕದಲ್ಲಿ ರೈತರು ಆತಂಕಕ್ಕೆ ಒಳಗಾಗಿರುವುದರಿಂದ ಮೋಡ ಬಿತ್ತನೆ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಕೃಷಿ ಸಚಿವರ ಗಮನ ಸೆಳೆಯುವುದು.

2. **ಡಾ॥ ರಫೀಕ್ ಅಹ್ಮದ್ ಎಸ್** ಇವರು – ಬೆಂಗಳೂರಿನ ಇಂದಿರಾನಗರದಲ್ಲಿರುವ ಸರ್ಕಾರಿ ವಸತಿಯುತ ಕಿವುಡ ಮತ್ತು ಮೂಕ ಮಕ್ಕಳ ಶಾಲೆಯ ನಿವೃತ್ತ ಶಿಕ್ಷಕರಿಗೆ ಪಿಂಚಣಿ ಸೌಲಭ್ಯವನ್ನು ನೀಡುವ ಬಗ್ಗೆ ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರ ಗಮನ ಸೆಳೆಯುವುದು.

3. **ಶ್ರೀ ಕೆ.ಬಿ. ಪ್ರಸನ್ನ ಕುಮಾರ್** ಇವರು – ಶಿವಮೊಗ್ಗ ನಗರದಲ್ಲಿ ಯು.ಜಿ.ಡಿ. ಕಾಮಗಾರಿಯು ಮಂದಗತಿಯಲ್ಲಿ ಸಾಗುತ್ತಿರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗಿರುವ ಬಗ್ಗೆ ಮಾನ್ಯ ನಗರಾಭಿವೃದ್ಧಿ ಮತ್ತು ಹಜ್ ಸಚಿವರ ಗಮನ ಸೆಳೆಯುವುದು.

4. **ಶ್ರೀ ಎಂ. ರಾಜಣ್ಣ** ಇವರು – ಚಿಕ್ಕಬಳ್ಳಾಪುರ ಜಿಲ್ಲೆಯ ಶಿಡ್ಲಘಟ್ಟ ವ್ಯಾಪ್ತಿಯಲ್ಲಿ ಸಣ್ಣ ನೀರಾವರಿ ಇಲಾಖೆಯಿಂದ ನಡೆಯುತ್ತಿರುವ ಕಳಪೆ ಕಾಮಗಾರಿಗಳಿಂದ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟುಮಾಡುತ್ತಿರುವ ಅಧಿಕಾರಿಗಳು ಮತ್ತು ಗುತ್ತಿಗೆದಾರರ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಸಣ್ಣ ನೀರಾವರಿ ಸಚಿವರ ಗಮನ ಸೆಳೆಯುವುದು.

5. **ಶ್ರೀ ಕೆ.ಎಸ್. ಪುಟ್ಟಣ್ಣಯ್ಯ** ಇವರು – ರಾಜ್ಯದ ಬರಗಾಲ, ನೀರಾವರಿ ಮತ್ತು ಸಾಲ ಮನ್ನಾದಂತಹ ವಿಷಯಗಳ ಬಗ್ಗೆ ಹೋರಾಟ ಮಾಡಿದ ರೈತರ ಮೇಲೆ ಸರ್ಕಾರ ಹೂಡಿರುವ ಎಲ್ಲಾ ಮೊಕದ್ದಮೆಗಳನ್ನು ಹಿಂಪಡೆಯುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

6. **ಶ್ರೀ ಎಂ.ಟಿ. ಕೃಷ್ಣಪ್ಪ** ಇವರು – ತುರುವೇಕೆರೆ ವಿಧಾನಸಭಾ ಕ್ಷೇತ್ರದ 180 ಫಲಾನುಭವಿಗಳಿಗೆ ಪಶುಭಾಗ್ಯ ಯೋಜನೆ ಮಂಜೂರಾಗಿರುವುದನ್ನು ಮಧುಗಿರಿ ತಾಲ್ಲೂಕಿಗೆ ವರ್ಗಾಯಿಸಿರುವುದರಿಂದ ತುರುವೇಕೆರೆ ಮತ್ತು ಗುಬ್ಬಿ ತಾಲ್ಲೂಕುಗಳ ಫಲಾನುಭವಿಗಳಿಗೆ ಅನ್ಯಾಯವಾಗುತ್ತಿರುವ ಬಗ್ಗೆ ಮಾನ್ಯ ಪಶುಸಂಗೋಪನೆ ಮತ್ತು ರೇಷ್ಮೆ ಸಚಿವರ ಗಮನ ಸೆಳೆಯುವುದು.

7. **ಶ್ರೀ ಸಿ.ಟಿ. ರವಿ** ಇವರು – ರಾಜ್ಯದಲ್ಲಿನ ತೆಲಗು ಗೌಡ ಜನಾಂಗಕ್ಕೆ ರಾಜಕೀಯ ಮೀಸಲಾತಿ ಜೊತೆಗೆ ಕೇಂದ್ರದ ಓಬಿಸಿ ಪಟ್ಟಿಗೆ ಸೇರ್ಪಡೆಗೊಳಿಸಲು ಸೂಕ್ತ ಶಿಫಾರಸ್ಸು ಮಾಡುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

8. **ಶ್ರೀ ಸಾ.ರಾ. ಮಹೇಶ್** ಇವರು – ಮೈಸೂರು ಜಿಲ್ಲೆ, ಕೆ.ಆರ್. ನಗರದ ಬೇರ್ಯ ಗ್ರಾಮದ ಉಪ ಪೊಲೀಸ್ ಠಾಣೆಯನ್ನು ಮೇಲ್ದರ್ಜೆಗೇರಿಸುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

9. **ಶ್ರೀ ಕೆ.ಜಿ. ಬೋಪಯ್ಯ** ಇವರು – ಕೊಡಗು ಜಿಲ್ಲೆಯ ಪ್ರಮುಖ ಜನಾಂಗವಾದ ಕೊಡವ ಸಮುದಾಯದ ಕುಲ ಶಾಸ್ತ್ರೀಯ ಅಧ್ಯಯನ ಪ್ರಾರಂಭಿಸುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

. . . 4

10. **ಶ್ರೀ ವೈ.ಎ. ನಾರಾಯಣ ಸ್ವಾಮಿ** ಇವರು – ಹೆಬ್ಬಾಳ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ 14 ಘೋಷಿತ ಕೊಳಚೆ ಪ್ರದೇಶಗಳ ಮನೆಗಳಿಗೆ ಭಾಗ್ಯಜ್ಯೋತಿ, ಕುಠೀರಜ್ಯೋತಿ ಇನ್ನಿತರ ಯೋಜನೆಗಳಡಿ ಉಚಿತ ವಿದ್ಯುತ್ ಒದಗಿಸುವ ಬಗ್ಗೆ ಮಾನ್ಯ ಇಂಧನ ಸಚಿವರ ಗಮನ ಸೆಳೆಯುವುದು.

11. **ಶ್ರೀಯುತರುಗಳಾದ ಹೆಚ್.ಎಸ್. ಪ್ರಕಾಶ್, ಸಿ.ಎನ್. ಬಾಲಕೃಷ್ಣ, ಹೆಚ್.ಡಿ. ರೇವಣ್ಣ, ಮತ್ತು ಹೆಚ್. ಕೆ. ಕುಮಾರಸ್ವಾಮಿ** ಇವರುಗಳು – ಹಾಸನ ಜಿಲ್ಲೆಯಲ್ಲಿ ರೈತರಿಗೆ ಕಳಪೆ ಮಟ್ಟದ ಬಿತ್ತನೆ ಬೀಜವನ್ನು ಮಾರಾಟ ಮಾಡಿ ವಂಚಿಸಿರುವ ವರ್ತಕರು ಹಾಗೂ ಅವರುಗಳೊಂದಿಗೆ ಶಾಮೀಲಾಗಿರುವ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವುದು ಹಾಗೂ ನಷ್ಟ ಅನುಭವಿಸಿರುವ ರೈತರಿಗೆ ಸೂಕ್ತ ಪರಿಹಾರ ನೀಡುವ ಬಗ್ಗೆ ಮಾನ್ಯ ಕೃಷಿ ಮಾರುಕಟ್ಟೆ ಮತ್ತು ತೋಟಗಾರಿಕೆ ಸಚಿವರ ಗಮನ ಸೆಳೆಯುವುದು.

12. **ಶ್ರೀಯುತರುಗಳಾದ ಹೆಚ್.ಡಿ. ರೇವಣ್ಣ, ಸಿ.ಎನ್. ಬಾಲಕೃಷ್ಣ ಮತ್ತು ಹೆಚ್.ಎಸ್. ಪ್ರಕಾಶ್** ಇವರುಗಳು – ಹಾಸನ ಜಿಲ್ಲೆ ಶಾಂತಿ ಗ್ರಾಮ ಮೊಸಳೆಹಳ್ಳಿ ಮತ್ತು ಇನ್ನಿತರೆಡೆಗಳಲ್ಲಿರುವ ಸರ್ಕಾರಿ ಐ.ಟಿ.ಐ ಕಾಲೇಜುಗಳಿಗೆ ಪ್ರಾಂಶುಪಾಲರು, ಅಧಿಕಾರಿಗಳು ಹಾಗೂ ಅಗತ್ಯ ಸಿಬ್ಬಂದಿಗಳನ್ನು ನೇಮಕ ಮಾಡುವುದು, ಸ್ವಂತ ಕಟ್ಟಡ ನಿರ್ಮಾಣಕ್ಕಾಗಿ ಹೆಚ್ಚುವರಿ ಅನುದಾನವನ್ನು ಬಿಡುಗಡೆಗೊಳಿಸುವುದು ಹಾಗೂ ಅವಶ್ಯಕವಿರುವ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಬಗ್ಗೆ ಮಾನ್ಯ ಮುಖ್ಯ ಮಂತ್ರಿಗಳ ಗಮನ ಸೆಳೆಯುವುದು.

13. **ಶ್ರೀಯುತರುಗಳಾದ ಸಿ.ಎನ್. ಬಾಲಕೃಷ್ಣ, ಹೆಚ್. ಕೆ ಕುಮಾರಸ್ವಾಮಿ, ಹೆಚ್.ಎಸ್. ಪ್ರಕಾಶ್ ಮತ್ತು ಹೆಚ್.ಡಿ. ರೇವಣ್ಣ** ಇವರುಗಳು – ಹಾಸನ ಜಿಲ್ಲೆ, ಚನ್ನರಾಯಪಟ್ಟಣ ಶೆಟ್ಟಿಹಳ್ಳಿ ಗ್ರಾಮದಲ್ಲಿರುವ ಸುಸಜ್ಜಿತ ಹಾಲು ಸಂಸ್ಕರಣೆ ಮತ್ತು ಪರಿವರ್ತನೆ ಘಟಕಕ್ಕೆ ನಂದಿನಿ ಹೈಟೆಕ್ ಪ್ರಾಡಕ್ಟ್ ಹೆಸರಿನಲ್ಲಿ ಸಂಪೂರ್ಣ ಆಟೋಮೇಷನ್ ವ್ಯವಸ್ಥೆ ಕಲ್ಪಿಸಿರುವ ಹಾಲಿನ ಘಟಕಕ್ಕೆ ವಿದ್ಯುತ್ ಸರಬರಾಜು ಮಾಡದಿರುವುದರಿಂದ ಉಂಟಾಗಿರುವ ತೊಂದರೆಯ ಬಗ್ಗೆ ಮಾನ್ಯ ಇಂಧನ ಸಚಿವರ ಗಮನ ಸೆಳೆಯುವುದು.

## 5. ಅರ್ಧ ಗಂಟೆ ಕಾಲಾವಧಿ ಚರ್ಚೆ

**ಶ್ರೀ ಹೆಚ್.ಕೆ. ಕುಮಾರಸ್ವಾಮಿ** ಇವರು – "ದಿನಾಂಕ:04.06.2017ರಂದು ಸಕಲೇಶಪುರ ತಾಲ್ಲೂಕಿನಲ್ಲಿ ಆನೆ ದಾಳಿಯಿಂದ ರೈತನೋರ್ವ ಸಾವನ್ನಪ್ಪಿದ್ದು ಸೇರಿದಂತೆ, ಆನೆ ದಾಳಿಯಿಂದ ಪ್ರಾಣ, ಆಸ್ತಿ, ಹಾನಿ ತಡೆಯಲು ಆನೆ ಕಾರಿಡಾರ್ ಯೋಜನೆ ಮತ್ತು ಇತರೆ ಪರಿಹಾರ ನೀಡುವ ಬಗ್ಗೆ" ದಿನಾಂಕ: 06.06.2017ರಂದು ಶೂನ್ಯವೇಳೆಯಲ್ಲಿ ಪ್ರಸ್ತಾಪಿಸಿದ ವಿಷಯ ಹಾಗೂ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

## 6. ಖಾಸಗಿ ಸದಸ್ಯರ ಕಾರ್ಯಕಲಾಪಗಳು

### ನಿರ್ಣಯಗಳು

**1) ಶ್ರೀ ಕೆ. ಗೋಪಾಲಯ್ಯ ಅವರು ಕೆಳಕಂಡ ನಿರ್ಣಯವನ್ನು ಮಂಡಿಸುವುದು.**

"ಸಹಕಾರ ಸಂಘ ಸಂಸ್ಥೆಗಳಿಗೆ ಆದಾಯ ತೆರಿಗೆ ಹಾಗೂ ಸೇವಾ ತೆರಿಗೆಗಳಿಂದ ವಿನಾಯಿತಿ ನೀಡಬೇಕೆಂದು ಈ ಸದನವು ಕೇಂದ್ರ ಸರ್ಕಾರವನ್ನು ಒತ್ತಾಯಿಸುತ್ತದೆ".

**2) ಶ್ರೀ ಕೆ.ಎಸ್. ಪುಟ್ಟಣ್ಣಯ್ಯ ಅವರು ದಿನಾಂಕ:03.12.2016ರಂದು ಮಂಡಿಸಿದ್ದ ಈ ಕೆಳಕಂಡ ನಿರ್ಣಯದ ಮೇಲೆ ಚರ್ಚೆ.**

"ಸತತವಾದ ಬರದಿಂದ ಕಂಗೆಟ್ಟಿರುವ ರಾಜ್ಯದ ರೈತರ, ಕೃಷಿ ಕಾರ್ಮಿಕರ ಮತ್ತು ಗ್ರಾಮೀಣ ಭಾಗದ ಸ್ವಸಹಾಯ ಸಂಘಗಳ ಸಹಕಾರಿ ಮತ್ತು ರಾಷ್ಟ್ರೀಕೃತ ಬ್ಯಾಂಕುಗಳು ಮತ್ತು ವಿವಿಧ ನಿಗಮ ಮಂಡಳಿಗಳಿಂದ ಪಡೆದ ಸಾಲವನ್ನು ಸಂಪೂರ್ಣ ಮನ್ನಾ ಮಾಡುವುದು, ಬೆಳೆಗಳಿಗೆ ಕೃಷಿ ಬೆಲೆ ನಿಗದಿ ಆಯೋಗ ಲೆಕ್ಕ ಹಾಕಿರುವ ಖರ್ಚು ಮತ್ತು ಅದರ ಮೇಲೆ ರಾಷ್ಟ್ರೀಯ ರೈತ ಆಯೋಗದ ಶಿಫಾರಸ್ಸಿನಂತೆ ವೈಜ್ಞಾನಿಕ ಪರಿಹಾರ ಕೊಡುವುದು ಹಾಗೂ 2009ರ ಕೇಂದ್ರ ಸರ್ಕಾರದ 'ರಾಷ್ಟ್ರೀಯ ಬರ ನಿರ್ವಹಣೆ ಮಾರ್ಗಸೂಚಿ'ಯನ್ವಯ ಬರ ನಿರ್ವಹಣೆ ಮಾಡುವುದು ಈ ಮೂರು ಸೇರಿದಂತೆ ವಿಶೇಷ ಪ್ಯಾಕೇಜ್‌ನ ಒಟ್ಟು ಅರ್ಥಿಕ ಜವಾಬ್ದಾರಿಯಲ್ಲಿ ಶೇಕಡ 35 ರಷ್ಟು ರಾಜ್ಯ ಸರ್ಕಾರವು ವಹಿಸಿಕೊಳ್ಳಬೇಕೆಂದು ಮತ್ತು ಶೇಕಡ 65ರಷ್ಟನ್ನು ಕೇಂದ್ರ ಸರ್ಕಾರ ನೀಡಬೇಕೆಂದು ಈ ಸದನವು ಸರ್ಕಾರವನ್ನು ಒತ್ತಾಯಿಸುತ್ತದೆ".

**ಎಸ್. ಮೂರ್ತಿ**
ಕಾರ್ಯದರ್ಶಿ(I/c)

---

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.
http://kla.kar.nic.in/assembly/lob/lob.htm